# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 820
2) ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು)
3) ಉತ್ತರಿಸುವ ದಿನಾಂಕ : 11-03-2020
4) ಉತ್ತರಿಸಬೇಕಾದ ಸಚಿವರು : ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಕರ್ನಾಟಕ ಮೀನುಗಾರಿಕೆ ಅಭಿವೃದ್ಧಿ ನಿಗಮ ಅನುಷ್ಠಾನಕ್ಕೆ ಬಂದಿದ್ದು ಯಾವಾಗ; ಅದರ ಧ್ಯೆಯೋದ್ದೇಶ ಗಳೇನು: | ಕರ್ನಾಟಕ ಮೀನುಗಾರಿಕಾ ಅಭಿವೃದ್ಧಿ ನಿಗಮವನ್ನು 1956 ರ ಕಂಪೆನಿ ಕಾಯಿದೆ ಪ್ರಕಾರ ಅಧಿಕೃತ ಶೇರು ಬಂಡವಾಳ ರೂ.3.00 ಕೋಟಿ ಮತ್ತು ಸಂದಾಯವಾದ ಶೇರು ಬಂಡವಾಳ ರೂ.7.12 ಲಕ್ಷಗಳೊಂದಿಗೆ ಮೀನುಗಾರರ ಶ್ರೇಯೋಭಿವೃದ್ಧಿ ಮತ್ತು ಮೀನುಗಾರಿಕಾ ಕ್ಷೇತ್ರದ ಅಭಿವೃದ್ಧಿಯ ದೃಷ್ಟಿಯಲ್ಲಿ 1970 ರಲ್ಲಿ ಸ್ಥಾಪಿಸಲಾಗಿದೆ. ಪ್ರಸ್ತುತ ರೂ.20.00, ಕೋಟಿ ಅಧಿಕೃತ ಬಂಡವಾಳವಿದ್ದು, ರೂ.17.84 ಕೋಟಿ ಸಂದಾಯವಾದ ರಾಜ್ಯ ಸರ್ಕಾರದ ಪಾಲು ಬಂಡವಾಳವಿದೆ.<br><br>**ನಿಗಮದ ಧ್ಯೆಯೋದ್ದೇಶಗಳು**<br><br>• ಡೀಸಿಲ್, ಮಂಜುಗಡ್ಡೆ, ಮತ್ತು ಮೀನುಗಾರಿಕಾ ಸಲಕರಣೆ ಗಳನ್ನು ಮೀನುಗಾರರಿಗೆ ಕಡಿಮೆ ಬೆಲೆಯಲ್ಲಿ ಪೂರೈಕೆ ಮಾಡುವುದು.<br>• ಪರ್ಸೀನ್ ಮೀನು ಮಾರಾಟ ಮಾಡುವ ಮುಖಾಂತರ ಮೀನುಗಾರರು ಹಿಡಿದ ಮೀನಿಗೆ ಉತ್ತಮ ಬೆಲೆ ನೀಡುವಿಕೆ.<br>• ಮೀನುಗಾರಿಕಾ ಇಲಾಖೆಯ ವಸತಿ, ಮೀನು ಮಾರುಕಟ್ಟೆ ಮತ್ತು ಇತರೆ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದು.<br>• ಸಸಾರಜನಕ ಭರಿತ ಮೀನಿನ ಪ್ರಚಾರಕ್ಕಾಗಿ ಹವಾನಿಯಂತ್ರಿತ ಮೀನು ಮಾರಾಟ ಮಳಿಗೆ ಹಾಗೂ ಮತ್ಸ್ಯದರ್ಶಿನಿ ಉಪಾಹಾರ ಗೃಹಗಳ ಸ್ಥಾಪನೆ.<br>• ರಾಜ್ಯದ ಒಳನಾಡು ಪ್ರದೇಶಕ್ಕೆ ತಾಜಾ ಹಾಗೂ ಶೀತಲೀಕೃತ ಮೀನು ಸರಬರಾಜು ಮಾಡಲು ಶೀತಲ ಸರಪಣಿ ಸ್ಥಾಪನೆ.<br>• ತಾಜಾ ಮತ್ತು ಘನೀಕೃತ ಮೀನು ಹಾಗೂ ಮೀನಿನ ಉತ್ಪನ್ನಗಳನ್ನು ರಫ್ತು ಮಾಡಲು ಬೇಕಾದ ಸಂಸ್ಕರಣಾ ಮತ್ತು ಸಂಸ್ಕರಣಾ ಪೂರ್ವ ಸ್ಥಾವರಗಳ ಸೌಲಭ್ಯಗಳನ್ನು ಒದಗಿಸುವುದು.<br>• ಅಲಂಕಾರಿಕಾ ಮೀನು, ಅಕ್ವೇರಿಯಂ ಹಾಗೂ ಸಲಕರಣೆಗಳ ಮಾರಾಟ, ಮೀನು ಆಹಾರ ಮತ್ತು ಮೀನೆಣ್ಣೆಗೆ ಬೇಕಾದ ಸೌಲಭ್ಯ ಒದಗಿಸುವುದು.<br>• ನೂತನ ಯೋಜನೆಗಳಾದ ಮೊಬೈಲ್ ಮೀನು ಮಾರಾಟ, ಮೊಬೈಲ್ ಮತ್ಸ್ಯದರ್ಶಿನಿ, ಹಾಗೂ ಆನ್ ಲೈನ್ ಮೀನು ಮಾರಾಟವನ್ನು ನಡೆಸುವುದು.<br>• ವಿವಿಧ ಮತ್ಸ್ಯಮೇಳ ಮತ್ತು ಇತರೆ ವಸ್ತು ಪ್ರದರ್ಶನಗಳಲ್ಲಿ ಭಾಗವಹಿಸಿ ಮೀನು ಸೇವನೆಯನ್ನು ಜನಪ್ರಿಯಗೊಳಿಸುವುದು. |

| | | |
|---|---|---|
| ಆ) | ಈ ನಿಗಮಕ್ಕೆ ಇದುವರೆಗೂ ಸರ್ಕಾರವು ನೀಡಿದ ಅನುದಾನದ ಮೊತ್ತ ಎಷ್ಟು; ಅನುದಾನವನ್ನು ಯಾವ ಉದ್ದೇಶಕ್ಕೆ ಬಳಕೆ ಮಾಡಲಾಗಿದೆ; | ನಿಗಮದ ಪುನಶ್ಚೇತನಕ್ಕಾಗಿ ರಾಜ್ಯ ಸರ್ಕಾರವು 2006-07 ನೇ ಸಾಲಿನಲ್ಲಿ ರೂ.4.12 ಕೋಟಿಗಳನ್ನು ಷೇರುಧನವಾಗಿ ನೀಡಿದ್ದು 2007-08 ನೇ ಸಾಲಿನಲ್ಲಿ ನಿಗಮಕ್ಕೆ ಪುನಶ್ಚೇತನಾ ಕಾರ್ಯಕ್ರಮದ ಮುಂದುವರಿಕೆಯಾಗಿ ಮೀನು ಮಾರಾಟ ಚಟುವಟಿಕೆ ಹಾಗೂ ಮೀನುಗಾರಿಕೆಗೆ ಸಂಬಂಧಿಸಿದ ಇತರ ಚಟುವಟಿಕೆಗಳನ್ನು ಅಭಿವೃದ್ಧಿಪಡಿಸಲು ರೂ. 7.50 ಕೋಟಿಗಳನ್ನು ಬಿಡುಗಡೆ ಮಾಡಿದೆ.<br><br>ಕೇಂದ್ರ / ರಾಜ್ಯ ಸರ್ಕಾರದ ಯೋಜನೆಗಳು ಹಾಗೂ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (RKVY)ಯಡಿ ಸುಮಾರು ರೂ.26.00 ಕೋಟಿಗಳಷ್ಟು ಅನುದಾನವನ್ನು ನೀಡಲಾಗಿರುತ್ತದೆ. ಸದರಿ ಅನುದಾನದಿಂದ ಮಂಗಳೂರು, ಮಲ್ಪೆ, ಗಂಗೊಳ್ಳಿ, ಭಟ್ಕಳ, ಹೊನ್ನಾವರ ಮತ್ತು ಕಾರವಾರಗಳಲ್ಲಿ ಒಟ್ಟು ಪ್ರತಿನಿತ್ಯ 220 ಟನ್ ಸಾಮರ್ಥ್ಯದ ಮಂಜುಗಡ್ಡೆ ಸ್ಥಾವರಗಳನ್ನು ನಿರ್ಮಾಣ ಮಾಡಲಾಗಿದೆ. ರಾಜ್ಯದ ಒಳನಾಡು ಪ್ರದೇಶಕ್ಕೆ ಶೀತಲೀಕೃತ ಮೀನು ಸರಬರಾಜು ಮಾಡಲು ಶೀತಲ ಸರಪಣಿಯನ್ನು ಸ್ಥಾಪಿಸಲಾಗಿದೆ.<br><br>ಮಂಗಳೂರಿನ ನಿಗಮದ ಕೇಂದ್ರ ಕಛೇರಿಯಲ್ಲಿ ಐರೋಪ್ಯ ಒಕ್ಕೂಟ ರಾಷ್ಟ್ರಗಳಿಗೆ ಮೀನು ರಫ್ತು ಮಾಡುವುದಕ್ಕಾಗಿ ಪರವಾನಿಗೆ ಹೊಂದಿದ ಆಧುನಿಕ ಮೀನು ಸಂಸ್ಕರಣಾ ಸ್ಥಾವರವನ್ನು ನಿರ್ಮಿಸಲಾಗಿದೆ. ಹಾಗೂ ಹೆಬ್ಬಾಳದಲ್ಲಿ ಶೀತಲಾಗಾರಗಳ ಸಂಕೀರ್ಣಗಳನ್ನು ನಿರ್ಮಿಸಲಾಗಿದೆ. ಅಲ್ಲದೆ, ಅಲಂಕಾರಿಕ ಮೀನು ಮರಿಗಳ ಉತ್ಪಾದನೆ ಮತ್ತು ಮಾರಾಟದ ಬಗ್ಗೆ 500 ಜನರಿಗೆ ತರಬೇತಿಯನ್ನು ನೀಡಲಾಗಿರುತ್ತದೆ. ರಾಜ್ಯದ ವಿವಿಧ ಭಾಗಗಳಲ್ಲಿ ಸುಮಾರು 19 ಮತ್ಸ್ಯದರ್ಶಿನಿ ಮೀನು ಉಪಾಹಾರ ಗೃಹ ಮತ್ತು ಮೀನು ಮಾರಾಟ ಮಳಿಗೆಗಳನ್ನು ನಿರ್ಮಾಣ ಮಾಡಲಾಗಿದೆ ಹಾಗೂ ಸುಮಾರು 24 ಸುಸಜ್ಜಿತ ಮೀನು ಮಾರುಕಟ್ಟೆಗಳನ್ನು ನಿರ್ಮಾಣ ಮಾಡಿ ಸಂಬಂಧಪಟ್ಟ ಗ್ರಾಮ ಪಂಚಾಯತ್ / ನಗರ ಸಭೆಗಳಿಗೆ ಫಲಾನುಭವಿಗಳ ಉಪಯೋಗಕ್ಕಾಗಿ ಹಸ್ತಾಂತರಿಸಲಾಗಿದೆ.<br><br>ಕೇಂದ್ರ ಸರ್ಕಾರದ ವಾಣಿಜ್ಯ ಮಂತ್ರಾಲಯದ ಟೈಸ್ ಯೋಜನೆಯಡಿ ರೂ.5.00 ಕೋಟಿ ಅನುದಾನ ಹಾಗೂ ರಾಜ್ಯ ಸರ್ಕಾರದ ಕೈಗಾರಿಕಾ ಇಲಾಖೆಯ ವಿಶ್ವೇಶ್ವರಯ್ಯ ಟ್ರೇಡ್ ಪ್ರಮೋಷನ್ ಸೆಂಟರ್, ಬೆಂಗಳೂರು ಇವರ ಮುಖಾಂತರ ರೂ.5.00 ಕೋಟಿ ಒಟ್ಟು ರೂ.10.00 ಕೋಟಿ ವೆಚ್ಚದಲ್ಲಿ ತದಡಿ ಮೀನುಗಾರಿಕೆ ಬಂದರಿನಲ್ಲಿ ನಿಗಮದಿಂದ ಐರೋಪ್ಯ ಒಕ್ಕೂಟ ರಾಷ್ಟ್ರಗಳಿಗೆ ಮೀನು ರಫ್ತು ಮಾಡುವ ಪರವಾನಿಗೆ ಹೊಂದಿರುವ ಆಧುನಿಕ ಮೆರೈನ್ ಎಕ್ಸ್ ಪೋರ್ಟ್ ಯೂನಿಟನ್ನು ನಿರ್ಮಿಸಲಾಗುತ್ತಿದೆ. |

-3-

| | | |
|---|---|---|
| ಇ) | ಮೀನುಗಾರರಿಗೆ ಅನುಕೂಲ ವಾಗುವ ಹಾಗೆ ನಿಗಮವು ರೂಪಿಸಿರುವ ಯೋಜನೆಗಳು ಯಾವುವು? | ಮೀನುಗಾರರಿಗೆ ಅನುಕೂಲವಾಗುವ ಹಾಗೆ ನಿಗಮವು ರೂಪಿಸಿರುವ ಯೋಜನೆಗಳು ಕೆಳಕಂಡಂತಿವೆ:-<br>• ಮೀನುಗಾರರು ಹಿಡಿದ ಮೀನಿಗೆ ಉತ್ತಮ ಬೆಲೆ ಒದಗಿಸಲು ರಾಜ್ಯಾದ್ಯಂತ ಮತ್ಸ್ಯದರ್ಶಿನಿ ಮೀನು ಉಪಾಹಾರ ಗೃಹ ಹಾಗೂ ಮೀನು ಮಾರಾಟ ಮಳಿಗೆಗಳನ್ನು ನಿರ್ಮಿಸಿದ್ದು, ಶೀತಲ ಸರಪಳಿ ಮುಖಾಂತರ ತಾಜಾ ಮೀನನ್ನು ಒದಗಿಸಲಾಗುತ್ತಿದೆ.<br>• ಮಂಜುಗಡ್ಡೆ, ಡೀಸಿಲ್ ಮತ್ತು ಮೀನುಗಾರಿಕಾ ಸಲಕರಣೆಗಳನ್ನು ಮೀನುಗಾರರಿಗೆ ಕಡಿಮೆ ಬೆಲೆಯಲ್ಲಿ ಪೂರೈಕೆ ಮಾಡುವುದು.<br>• ಮೀನು ಹಾಳಾಗದಂತೆ ಶೀತಲೀಕರಣ ಮತ್ತು ಘನೀಕೃತ ವ್ಯವಸ್ಥೆ ಒದಗಿಸಲಾಗಿದೆ.<br>• ರಾಜ್ಯದ ಒಳನಾಡು ಪ್ರದೇಶಕ್ಕೆ ಶೀತಲೀಕೃತ ಮೀನು ಸರಬರಾಜು ಮಾಡಲು ಶೀತಲ ಸರಪಣಿಯನ್ನು ಸ್ಥಾಪಿಸಲಾಗಿದೆ.<br>• ಪರ್ಸೀನ್ ಮೀನು ಮಾರಾಟ ಮಾಡುವ ಮುಖಾಂತರ ಮೀನುಗಾರರು ಹಿಡಿದ ಮೀನಿಗೆ ಉತ್ತಮ ಬೆಲೆ ನೀಡುವಿಕೆ.<br>• ಮೀನುಗಾರಿಕಾ ಇಲಾಖೆಯ ವಸತಿ, ಮೀನು ಮಾರುಕಟ್ಟೆ ಮತ್ತು ಇತರೆ ಯೋಜನೆಗಳನ್ನು ಅನುಷ್ಠಾನಕ್ಕೆ ತರುವುದು.<br>• ತಾಜಾ ಮತ್ತು ಘನೀಕೃತ ಮೀನು ಹಾಗೂ ಮೀನಿನ ಉತ್ಪನ್ನಗಳನ್ನು ರಫ್ತು ಮಾಡಲು ಬೇಕಾದ ಸಂಸ್ಕರಣಾ ಮತ್ತು ಸಂಸ್ಕರಣಾ ಪೂರ್ವ ಸ್ಥಾವರಗಳ ಸೌಲಭ್ಯಗಳನ್ನು ಒದಗಿಸುವುದು.<br>• ಅಲಂಕಾರಿಕಾ ಮೀನು, ಅಕ್ವೇರಿಯಂ ಹಾಗೂ ಸಲಕರಣೆಗಳ ಮಾರಾಟ, ಮೀನು ಆಹಾರ ಮತ್ತು ಮೀನೆಣ್ಣೆಗೆ ಬೇಕಾದ ಸೌಲಭ್ಯ ಒದಗಿಸುವುದು.<br>• ನೂತನ ಯೋಜನೆಗಳಾದ ಮೊಬೈಲ್ ಮೀನು ಮಾರಾಟ, ಮೊಬೈಲ್ ಮತ್ಸ್ಯದರ್ಶಿನಿ, ಹಾಗೂ ಆನ್ ಲೈನ್ ಮೀನು ಮಾರಾಟವನ್ನು ನಡೆಸುವುದು.<br>• ವಿವಿಧ ಮತ್ಸ್ಯಮೇಳ, ಮತ್ತು ಇತರೆ ವಸ್ತುಪ್ರದರ್ಶನಗಳಲ್ಲಿ ಭಾಗವಹಿಸಿ ಮೀನು ಸೇವನೆಯನ್ನು ಜನಪ್ರಿಯಗೊಳಿಸುವುದು. |

ಸಂಖ್ಯೆ: ಪಸಂಮೀ ಇ-55 ಮೀಇಯೋ 2020

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ, ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು